## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 909
2. ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
3. ಉತ್ತರಿಸುವ ದಿನಾಂಕ : 21.12.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಬ್ಬು ಬೆಳೆಯು ರೈತರಿಗೆ ಕಬ್ಬಿನ ಬಾಕಿ ಹಣವನ್ನು ಸರಿಯಾಗಿ ವಿತರಿಸದಿರುವುದು ಹಾಗೂ ಕಬ್ಬಿಗೆ ವೈಜ್ಞಾನಿಕವಾದ ಬೆಲೆ ನಿಗದಿ ಮಾಡುವಲ್ಲಿ ವಿಫಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | **ಕಬ್ಬಿನ ಬಿಲ್ಲು ಬಾಕಿ:-** ಕೆಲವು ಸಕ್ಕರೆ ಕಾರ್ಖಾನೆಗಳು ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬಿನ ಬಿಲ್ಲನ್ನು ಬಾಕಿ ಉಳಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br>**ಬಾಕಿ ಪಾವತಿಗೆ ಕ್ರಮ:-** ಕಬ್ಬು (ನಿಯಂತ್ರಣ) ಆದೇಶ 1966 ರ ಪ್ರಕಾರ ಕಬ್ಬಿನ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು ಸಕ್ಕರೆ ಕಾರ್ಖಾನೆಗಳು ರೈತರು ಕಬ್ಬು ಸಾಗಾಣಿಕೆ ಮಾಡಿದ 14 ದಿನಗಳೊಳಗಾಗಿ ಕಬ್ಬಿನ ಬಿಲ್ಲನ್ನು ಪಾವತಿಸಬೇಕಾಗಿರುತ್ತದೆ. ಸದರಿ ನಿಯಮವನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ವಿಳಂಬವಾದ ಅವಧಿಗೆ ಶೇ.15 ರಷ್ಟು ಬಡ್ಡಿ ಸಮೇತ ಕಬ್ಬಿನ ಬಿಲ್ಲು ಪಾವತಿಸಲು ಅವಕಾಶವಿರುತ್ತದೆ. ಕಾರ್ಖಾನೆಗಳು ರೈತರ ಕಬ್ಬಿನ ಬಿಲ್ಲನ್ನು ವಿಳಂಬವಾಗಿ ಪಾವತಿಸಿದ ಪ್ರಕರಣಗಳಲ್ಲಿ ಕಬ್ಬು (ನಿಯಂತ್ರಣ) ಆದೇಶ 1966 ಕಲಂ 3(8) ರ ಪ್ರಕಾರ ವಸೂಲಾತಿ ಪ್ರಮಾಣ ಪತ್ರವನ್ನು ಹೊರಡಿಸಿ ಬಡ್ಡಿ ಸಮೇತ ಪಾವತಿಸುವಂತೆ ಸೂಚಿಸಲಾಗುತ್ತಿದೆ. ರಾಜ್ಯದ ಕಬ್ಬು ಬೆಳೆಗಾರ ರೈತರು ಕಬ್ಬಿನ ಬಿಲ್ಲನ್ನು ಸಕಾಲದಲ್ಲಿ ಪಡೆಯಲು ಅಗತ್ಯವಾದ ಎಲ್ಲ ಕಾನೂನಾತ್ಮಕ ಕ್ರಮಗಳನ್ನು ಸರ್ಕಾರವು ಕೈಗೊಂಡಿರುತ್ತದೆ.<br>**ಕಬ್ಬಿಗೆ ಬೆಲೆ ನಿಗದಿ:-** ಕಬ್ಬು (ನಿಯಂತ್ರಣ) ಆದೇಶ 1966 ರ ಖಂಡ (3)ರ ಅವಕಾಶದಂತೆ ಕೇಂದ್ರ ಸರ್ಕಾರವು ಪ್ರತಿ ಸಕ್ಕರೆ ಹಂಗಾಮಿಗೆ ಕಬ್ಬಿನ ದರವನ್ನು ನಿಗದಿಪಡಿಸಿ ಘೋಷಿಸುತ್ತದೆ.<br>ಕೇಂದ್ರ ಸರ್ಕಾರದ ಕೃಷಿ ವೆಚ್ಚ ಮತ್ತು ಬೆಲೆ ಆಯೋಗವು (Commission for Agricultural Costs and Prices) ಕೃಷಿ ತಜ್ಞರು, ಸಕ್ಕರೆ ಕಾರ್ಖಾನೆಗಳ ಪ್ರತಿನಿಧಿಗಳು ಮತ್ತು ರೈತರ ಪ್ರತಿನಿಧಿಗಳನ್ನು ಒಳಗೊಂಡ ಸಮಿತಿಯಾಗಿರುತ್ತದೆ. ಈ ಸಮಿತಿಯ ಸದಸ್ಯರು ರೈತರು ಬೆಳೆಯುವ ಕಬ್ಬಿನ ಸಂಬಂಧ ಒಂದು ವರ್ಷ ಮುಂಚಿತವಾಗಿ ಕಬ್ಬು ಬೆಳೆಯುವ ರಾಜ್ಯಗಳಿಗೆ ಭೇಟಿ ನೀಡಿ ಸಂಬಂಧಿಸಿದ ರಾಜ್ಯ ಸರ್ಕಾರಗಳೊಡನೆ ಚರ್ಚಿಸಿ, ಪ್ರಸ್ತುತ ಕಬ್ಬಿನ ಉತ್ಪಾದನಾ ವೆಚ್ಚ, ಕಬ್ಬು ಬೆಳೆಗಾರರಿಗೆ ಇತರ ಬೆಳೆಗಳಿಂದ ಬರುವ ಆದಾಯ ಮತ್ತು ಸಾಮಾನ್ಯವಾಗಿ ಪ್ರಚಲಿತವಿರುವ ಕೃಷಿ ವಸ್ತುಗಳ ಬೆಲೆ, ಗ್ರಾಹಕರಿಗೆ ದೊರೆಯುವ ಯೋಗ್ಯ ಸಕ್ಕರೆ ಬೆಲೆ, ಕಬ್ಬಿನಿಂದ ಉತ್ಪಾದನೆಯಾದ ಸಕ್ಕರೆ ಮಾರಾಟದ ಬೆಲೆ ಹಾಗೂ ಕಬ್ಬಿನಲ್ಲಿರುವ ಸಕ್ಕರೆ ಇಳುವರಿ ಪ್ರಮಾಣ ಇತ್ಯಾದಿ ಅಂಶಗಳನ್ನು ಅವಲೋಕಿಸಿ ಅಧ್ಯಯನ ನಡೆಸಿ ಕಬ್ಬಿಗೆ ವೈಜ್ಞಾನಿಕ ದರ ನಿಗದಿ ಮಾಡುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುತ್ತದೆ. |
| (ಆ) | ಹಾಗಿದ್ದಲ್ಲಿ, ರೈತರಿಗೆ ಕಬ್ಬಿನ ಬಾಕಿ ಹಣವನ್ನು ವಿತರಿಸಲು ಮತ್ತು ಕಬ್ಬಿಗೆ ವೈಜ್ಞಾನಿಕವಾದ ಬೆಲೆ ನಿಗದಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | |

ಕೇಂದ್ರ ಸರ್ಕಾರವು ಸದರಿ ಶಿಫಾರಸ್ಸಿಗಳನ್ನು ಗಮನದಲ್ಲಿಟ್ಟುಕೊಂಡು ಪ್ರತಿ ವರ್ಷ ಕಬ್ಬಿಗೆ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ನಿಗದಿಗೊಳಿಸಿ ಘೋಷಿಸುತ್ತದೆ. ಕೇಂದ್ರ ಸರ್ಕಾರವು ನಿಗದಿಪಡಿಸುವ ಎಫ್.ಆರ್.ಪಿ. ದರವನ್ನು ಆಧರಿಸಿ ರಾಜ್ಯ ಸರ್ಕಾರವು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ತಿದ್ದುಪಡಿ ಅಧಿನಿಯಮ 2014 ರ ಕಲಂ 4(ಎ) ರೀತ್ಯಾ ರಾಜ್ಯದ ಸಕ್ಕರೆ ಕಾರ್ಖಾನೆಗಳ ಸಕ್ಕರೆ ಇಳುವರಿಯನ್ನು ಆಧರಿಸಿ ಕಾರ್ಖಾನೆವಾರು ಎಫ್.ಆರ್.ಪಿ. ದರವನ್ನು ಘೋಷಣೆ ಮಾಡಲಾಗುತ್ತದೆ.

2021-22ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಕಾರ್ಖಾನೆಗಳಿಗೆ ಸರಬರಾಜು ಆಗುವ ಕಬ್ಬಿಗೆ ಮೊದಲನೇ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು (ಎಫ್.ಆರ್.ಪಿ) ದಿನಾಂಕ:31.08.2021ರಂದು ಘೋಷಿಸಿರುತ್ತದೆ. ಕೇಂದ್ರ ಸರ್ಕಾರವು 2021-22ನೇ ಸಕ್ಕರೆ ಹಂಗಾಮಿಗೆ ನಿಗದಿಪಡಿಸಿರುವ ಎಫ್.ಆರ್.ಪಿ ಆಧಾರದ ಮೇಲೆ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ತಿದ್ದುಪಡಿ ಅಧಿನಿಯಮ 2014ರ ಕಲಂ 2(ii) (ಇಎ) ಮತ್ತು 9(1) ರನ್ವಯ ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯನ್ನು ಆಧಾರವಾಗಿಟ್ಟುಕೊಂಡು ಕಾರ್ಖಾನೆವಾರು ಮೊದಲನೇ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದ ದಿನಾಂಕ:29.10.2021ರ ಆದೇಶದಲ್ಲಿ ಅಧಿಕೃತವಾಗಿ ಪ್ರಕಟಿಸಲಾಗಿದೆ.

(ಇ) ರಾಜ್ಯದಲ್ಲಿ ರೈತರ ಕಬ್ಬು ಬಾಕಿ ಉಳಿಸಿಕೊಂಡ ಮೊತ್ತವೆಷ್ಟು; ಯಾವ ಯಾವ ಸಕ್ಕರೆ ಕಾರ್ಖಾನೆಗಳು ಎಷ್ಟು ಮೊತ್ತ ಬಾಕಿ ಉಳಿಸಿಕೊಂಡಿವೆ; (ಸಂಪೂರ್ಣ ವಿವರ ನೀಡುವುದು)

2015-16, 2018-19ನೇ ಸಾಲಿನಿಂದ 2019-20ನೇ ಹಂಗಾಮುಗಳಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ 06 ಸಕ್ಕರೆ ಕಾರ್ಖಾನೆಗಳು ಒಟ್ಟು 26.38 ಕೋಟಿಗಳ ಕಬ್ಬು ಬಿಲ್ಲನ್ನು ಪಾವತಿಸುವುದು ಬಾಕಿ ಇರುತ್ತದೆ. ವಿವರಗಳು ಈ ಕೆಳಕಂಡಂತಿವೆ.

(ರೂ.ಕೋಟಿಗಳಲ್ಲಿ)

| ಕ್ರ.ಸಂ. | ಹಂಗಾಮು | ಕಾರ್ಖಾನೆಯ ಹೆಸರು | ಬಾಕಿ ಮೊತ್ತ |
|---|---|---|---|
| 1. | 2015-16 | ಮೆ॥ ಶಿವಸಾಗರ ಶುಗರ್ಸ್ ಲಿ., ಉದಪುಡಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ | 11.65 |
| 2. | 2018-19 | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ್, ಹುಮಾನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. | 0.89 |
| 3. | | ಭವಾನಿ ಶುಗರ್ಸ್ ಲಿ., ಬರೂರ, ಬೀದರ್ ಜಿಲ್ಲೆ. | 1.80 |
| 4. | | ಸಾವರೀನ್ ಇಂಡಸ್ಟ್ರೀಸ್ ಲಿ., ತೇರದಾಳ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 4.99 |
| 5. | | ಧ್ಯಾನಯೋಗಿ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ., ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 1.25 |
| 6. | 2019-20 | ಶ್ರೀಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ., ಬೈಲಹೊಂಗಲ, ಬೆಳಗಾವಿ ಜಿಲ್ಲೆ | 5.80 |
| | | ಒಟ್ಟು | **26.38** |

| | | |
|---|---|---|
| (ಈ) | ಈಗಾಗಲೇ ತೊಂದರೆಯಲ್ಲಿರುವ ರೈತರಿಗೆ ಯಾವ ಕಾಲಮಿತಿಯಲ್ಲಿ ರೈತರ ಕಬ್ಬಿನ ಬಾಕಿ ಮೊತ್ತವನ್ನು ವಿತರಿಸಲಾಗುವುದು? ಈ ವಿಚಾರದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು? ( ವಿವರ ನೀಡುವುದು) | 2015-16ನೇ ಹಂಗಾಮಿನಲ್ಲಿ ಮೆ॥ ಶಿವಸಾಗರ ಶುಗರ್ಸ್ ಲಿ., ಉದಪುಡಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ – ಈ ಕಾರ್ಖಾನೆಯು ರೂ.11.65 ಕೋಟಿಗಳಷ್ಟು ಕಬ್ಬು ಬಿಲ್ಲು ಬಾಕಿ ಉಳಿಸಿಕೊಂಡಿದ್ದು, ದಿನಾಂಕ: 06.10.2016ರಂದು ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆ ಇವರಿಗೆ ಬಾಕಿ ವಸೂಲಾತಿ ಪ್ರಮಾಣ ಪತ್ರವನ್ನು ಹೊರಡಿಸಲಾಗಿದೆ. ಮೆ॥ ಶಿವಸಾಗರ ಶುಗರ್ಸ್ ಲಿ., – ಈ ಕಾರ್ಖಾನೆಯು ಕಳೆದ ಐದು ಹಂಗಾಮುಗಳಿಂದ ನಿಷ್ಕ್ರೀಯವಾಗಿದ್ದು, ಸಕ್ಕರೆ ಉತ್ಪಾದನೆ ಇಲ್ಲದಿರುವುದರಿಂದ ಕಾರ್ಖಾನೆಯ ಇತರೆ ಚರ ಮತ್ತು ಸ್ಥಿರಾಸ್ತಿಗಳ ಮೇಲೆ ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರಿಗೆ ತಿಳಿಸಲಾಗಿತ್ತು. ಏತನ್ಮಧ್ಯೆ ಕಾರ್ಖಾನೆಯ ಆಡಳಿತ ಮಂಡಳಿಯ ನಿರ್ಣಯದಂತೆ ಮೆ॥ ಶಿವಸಾಗರ ಶುಗರ್ಸ್ ಲಿ.,– ಈ ಕಾರ್ಖಾನೆಯನ್ನು ಮೆ॥ ಅರಿಹಂತ್ ಶುಗರ್ಸ್ ಲಿ., ಇವರಿಗೆ ವಹಿಸಿಕೊಡಲಾಗಿರುತ್ತದೆ. ಮೆ॥ ಅರಿಹಂತ್ ಶುಗರ್ಸ್ ಮತ್ತು ಮೆ॥ ಶಿವಸಾಗರ ಶುಗರ್ಸ್ ಲಿ., ಈ ಎರಡೂ ಕಾರ್ಖಾನೆಗಳು ನೀಡಿರುವ ಮುಚ್ಚಳಿಕೆ ಪತ್ರದ ಪ್ರಕಾರ ಬಾಕಿ ಇರುವ ರೈತರ ಕಬ್ಬಿನ ಬಿಲ್ಲನ್ನು ಮಾರ್ಚ್ 2022ರೊಳಗಾಗಿ ಪಾವತಿಸುವುದಾಗಿ ತಿಳಿಸಲಾಗಿದೆ. ಅದರಂತೆ ಕಬ್ಬಿನ ಬಿಲ್ಲು ಬಾಕಿ ಪಾವತಿಯು ಪ್ರಗತಿಯಲ್ಲಿರುತ್ತದೆ. ಈ ಎರಡೂ ಕಾರ್ಖಾನೆಗಳು ಕಂಪನಿ ಕಾಯ್ದೆಯಡಿ ನೋಂದಣಿಯಾಗಿರುವ ಖಾಸಗಿ ಕಾರ್ಖಾನೆಗಳಾಗಿರುತ್ತವೆ. ಕಬ್ಬು ಬೆಳೆಗಾರ ರೈತರ ಮತ್ತು ಕಾರ್ಮಿಕರ ಹಿತದೃಷ್ಟಿಯಿಂದ ಮೆ॥ ಅರಿಹಂತ್ ಶುಗರ್ಸ್ ಲಿ., ಇವರು ಪ್ರಸ್ತುತ 2021-22ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭಿಸಲು ಪೂರ್ವ ಸಿದ್ಧತಾ ಕ್ರಮಗಳನ್ನು ಕೈಗೊಂಡಿರುತ್ತಾರೆ. ಸರ್ಕಾರವು ಕಾರ್ಖಾನೆಯಿಂದ ರೈತರಿಗೆ ಪಾವತಿಯಾಗಬೇಕಾಗಿರುವ ಕಬ್ಬು ಬಿಲ್ಲು ಪಾವತಿಯ ಸಂಬಂಧ ಎಲ್ಲಾ ಅಗತ್ಯ ಕಾನೂನಾತ್ಮಕ ಕ್ರಮಗಳನ್ನು ಕೈಗೊಂಡಿರುತ್ತದೆ.<br>2018-19ನೇ ಸಾಲಿನಲ್ಲಿ ಬಾಕಿ ಉಳಿಸಿಕೊಂಡಿರುವ ನಾಲ್ಕು ಸಕ್ಕರೆ ಕಾರ್ಖಾನೆಗಳ ವಿರುದ್ಧ ವಸೂಲಾತಿ ಪ್ರಮಾಣ ಪತ್ರವನ್ನು ಹೊರಡಿಸಿ ಕ್ರಮ ಕೈಗೊಳ್ಳಲು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. ಆದಾಗ್ಯೂ, ಕಬ್ಬು ಬಿಲ್ಲು ಪಾವತಿಸದೇ ಇರುವುದರಿಂದ ಈ ನಾಲ್ಕು ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ಅಂದಿನ ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು ದಿನಾಂಕ:09.06.2021ರಂದು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ಕಾರ್ಖಾನೆಗಳ ಚರ ಮತ್ತು ಸ್ಥಿರಾಸ್ತಿಗಳನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿ ಕಬ್ಬು ಬಿಲ್ಲು ವಸೂಲಾತಿಗೆ ಸೂಕ್ತ ಕ್ರಮಕೈಗೊಳ್ಳುವಂತೆ ಸೂಚಿಸಿರುತ್ತಾರೆ. ಈ ನಾಲ್ಕು ಸಕ್ಕರೆ ಕಾರ್ಖಾನೆಗಳು ಪ್ರಸ್ತುತ ನಿಷ್ಕ್ರೀಯವಾಗಿದ್ದು ಬಾಕಿ ವಸೂಲಾತಿಗೆ ಎಲ್ಲಾ ಅಗತ್ಯ ಕಾನೂನು ಕ್ರಮಗಳನ್ನು ಕೈಗೊಳ್ಳಲಾಗಿದೆ. |

......4

| | | |
|---|---|---|
| | | 2019–20ನೇ ಹಂಗಾಮಿನಲ್ಲಿ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಯು ರೂ.5.80 ಕೋಟಿಗಳನ್ನು ಪಾವತಿಸುವುದನ್ನು ಬಾಕಿ ಉಳಿಸಿಕೊಂಡಿರುತ್ತದೆ. ಕಾರ್ಖಾನೆಯು ಕಬ್ಬಿನ ಬಾಕಿ ಬಿಲ್ಲನ್ನು ಪಾವತಿ ಮಾಡದೇ ಇರುವುದರಿಂದ ಕಬ್ಬು (ನಿಯಂತ್ರಣ) ಆದೇಶ 1966ರ ಕಲಂ 3(8) ರ ಅವಕಾಶಗಳ ರೀತ್ಯಾ ಕಬ್ಬು ಬಿಲ್ಲು ಬಾಕಿ ವಸೂಲಾತಿಗಾಗಿ ದಿನಾಂಕ:06.09.2021 ರಂದು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರಿಗೆ ವಸೂಲಾತಿ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳ ಮೂಲಕ ನೀಡಲಾಗಿದೆ. ಈ ಕಾರ್ಖಾನೆಯು ಕಬ್ಬು ಬಿಲ್ಲು ಪಾವತಿಸದೇ ಇರುವುದರಿಂದ ಕಬ್ಬು ನಿಯಂತ್ರಣ ಆದೇಶ 1966 ಕಲಂ 3(8)ರ ಅವಕಾಶ ರಿತ್ಯಾ ಕಬ್ಬು ಬಿಲ್ಲು ಬಾಕಿ ವಸೂಲಾತಿಗಾಗಿ ಜಿಲ್ಲಾಧಿಕಾರಿಗಳು, ಬೆಳಗಾವಿ ಇವರ ಮೂಲಕ ವಸೂಲಾತಿ ದೃಢೀಕರಣ ಪತ್ರವನ್ನು ದಿನಾಂಕ:06.09.2021 ರಂದು ಹೊರಡಿಸಲಾಗಿದೆ. ಸದರಿ ಆದೇಶವನ್ನು ಪ್ರಶ್ನಿಸಿ ಕಾರ್ಖಾನೆಯ ಆಡಳಿತ ಮಂಡಳಿಯು ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ.104662/2021 ಅನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯು ಇತ್ಯರ್ಥಕ್ಕೆ ಬಾಕಿ ಇರುತ್ತದೆ. |

**ಸಂಖ್ಯೆ: ಸಿಐ 132 ಎಸ್‌ಜಿಎಫ್ 2021**

(ಶಂಕರ ಬ.ಪಾಟೀಲ ಮುನೇನಕೊಪ್ಪ)

**ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು**